ಹೆಚ್.ಎಸ್. ಉಷಾರಾಣಿ*

# ಬಾಹತ್ತರನಿಯೋಗಿಗಳು_ಒಂದು ಅಧ್ಯಯನ

ನಿರ್ದಿಷ್ಟ ಕೆಲಸ ಕಾರ್ಯಗಳನ್ನು ನಿರ್ವಹಿಸಲು ನಿಯುಕ್ತರಾದವರೇ ನಿಯೋಗಿಗಳು ಅಂದಮೇಲೆ ಬಾಹತ್ತರ ನಿಯೋಗಿಗಳು ನಿರ್ವಹಿಸುತ್ತಿದ್ದ ಕೆಲಸಗಳು ಯಾವುವು? ಇವರ ಅವಶ್ಯಕತೆ ಕಂಡುಬರುತ್ತಿದ್ದುದಾದರೂ ಎಲ್ಲಿ ? ಈ ಹಿನ್ನೆಲೆಯಲ್ಲಿ ಬಾಹತ್ತರನಿಯೋಗಿಗಳನ್ನು ಅಧ್ಯಯನ ಮಾಡುವುದೇ ಪ್ರಸ್ತುತ ಲೇಖನದ ಉದ್ದೇಶವಾಗಿದೆ.

ಮಧ್ಯಕಾಲೀನ ಯುಗದಲ್ಲಿ ರಚಿಸಲ್ಪಟ್ಟ ಸಹಸ್ರಾರು ಶಾಸನಗಳು ದಾನ ಶಾಸನಗಳಿದ್ದು ದೇವಾಲಯಗಳಿಗೆ ದತ್ತಿಕೊಟ್ಟ ಮಾಹಿತಿಯನ್ನು ಒದಗಿಸುತ್ತವೆ. ದೇವಾಲಯಗಳ ನಿರ್ವಹಣೆಯಲ್ಲಿ ಉದ್ಯೋಗಿಗಳ ಪಾತ್ರ ಮಹತ್ವರವಾದುದು. ಉದ್ಯೋಗಿಗಳನ್ನು ಸಾಮಾನ್ಯವಾಗಿ ದೇವರ ಪರಿವಾರ, ಪರಿಚಾರಕ ವರ್ಗ, ದೇವರ ಸರ್ವ ನಿಯೋಗಿಗಳು ಎಂದು ಸಂಬೋಧಿಸಲಾಗಿದೆ. ಕೆಲವು ಶಾಸನಗಳಲ್ಲಿ ಕಂಡುಬರುವ ಬಾಹತ್ತರನಿಯೋಗಿ ಎಂಬ ಪದ ಅಧ್ಯಯನಾರ್ಹ ಬಾಹತ್ತರನಿಯೋಗಿ ಎಂದಾಗ ನಿಯುಕ್ತರಾದ ಎಪ್ಪತ್ತೆರಡು ಮಂದಿ ಎಂಬ ಅರ್ಥದವರೆಂಬುದನ್ನು ಈ ಎಪ್ಪತ್ತೆರಡು ಮಂದಿಯ ನಿಯುಕ್ತಿಗೆ ಬಾಹತ್ತರ ನಿಯೋಗಾಧಿಪತಿ ಎಂಬ ಅಧಿಕಾರಿ ಪದನಾಮವನ್ನು ಶಾಸನಗಳಲ್ಲಿ ಗಮನಿಸುತ್ತೇವೆ. ಇದರಿಂದ ಬಾಹತ್ತರ ನಿಯೋಗಿಗಳಿಗೆ ಪ್ರಾಧಾನ್ಯತೆ ನೀಡಲಾಗಿತ್ತೆಂದು ಗೊತ್ತಾಗುತ್ತದಲ್ಲವೆ ?

ಶಾಸನಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ, ಬಾಹತ್ತರನಿಯೋಗಿ ಎಂಬ ಪದ ಬಹುಸಂಖ್ಯೆಯ ನಿಯುಕ್ತಿಯನ್ನುದ್ದೇಶಿಸಿ ಸಾಂಕೇತಿವಾಗಿ ಬಳಸಲ್ಪಟ್ಟದೆಂದು ವೇದ್ಯವಾಗುತ್ತದೆ. ಅಂದು ದೇವಾಲಯಗಳ ನಿರ್ವಹಣೆಗೆ ಬಹುನಿಯುಕ್ತ ಅಗತ್ಯವಿತ್ತು. ದೇವಾಲಯಗಳು ಅಗ್ರಹಾರಗಳಲ್ಲಿ ನಿರ್ಮಾಣಗೊಳ್ಳುತ್ತಿದ್ದುದರಿಂದ ಅಗ್ರಹಾರಗಳ ಕಾರ್ಯಕ್ಷೇತ್ರ ವಿಸ್ತರಿಸತೊಡಗಿತು. ಅಗ್ರಹಾರಗಳಲ್ಲಿ ಹಲವು ವಿಧ ಮಹಾ ಅಗ್ರಹಾರ ಪಿರಿಯ ಅಗ್ರಹಾರ, ಅನಾದಿ ಅಗ್ರಹಾರ, ಪರಮೇಶ್ವರದತ್ತಿ ಅಗ್ರಹಾರ, ಉತ್ತಮದ ಅಗ್ರಹಾರ ಎಂದು ಗುರುತಿಸಬಹುದು.[1] ಮಹಾ ಅಗ್ರಹಾರ ಅಥವಾ ಪಿರಿಯ ಅಗ್ರಹಾರಗಳ ದೇವಾಲಯಗಳಲ್ಲಿ ಬಹುಸಂಖ್ಯೆಯ ನಿಯೋಗ ಸಾಧ್ಯವಾಗುತ್ತಿತ್ತಷ್ಟೆ.

ಮೊದಲಿಗೆ, ಬಾಹತ್ತರನಿಯೋಗಿಗಳನ್ನು ಚಿತ್ರಿಸಲು ನೆರವಾಗುವ ಶಾಸನಗಳು ಕಡಿಮೆ ಸಂಖ್ಯೆಯಲ್ಲಿವೆ. ಕಲ್ಯಾಣಿ ಚಾಲುಕ್ಯರ ಜಗದೇಕಮಲ್ಲನ ಶಾಸನವೊಂದು[2] ಬರ್ಮಣ್ಣಯ್ಯ ದಂಡನಾಯಕನನ್ನು 'ಬಾಹತ್ತರ ನಿಯೋಗಾಧಿಷ್ಠಾಯಕಂ ಎಂದು ವರ್ಣಿಸುತ್ತದೆ. ಇದು ಕಲ್ಯಾಣಿ ಚಾಲುಕ್ಯರ ಕಾಲದಿಂದ ಬಹುನಿಯೋಗಿಗಳ ಪ್ರತಿಷ್ಠಾಪನೆಯನ್ನು ಸೂಚ್ಯವಾಗಿ ತಿಳಿಸುತ್ತದೆ. (ಈ ಕಾಲಕ್ಕೂ ಮೊದಲು ಬಾಹತ್ತರ

* ಉಪನ್ಯಾಸಕರು : ವಿದ್ಯೋದಯ ಕಾಲೇಜು, ತಿ. ನರಸೀಪುರ, ಮೈಸೂರು ಜಿಲ್ಲೆ

1 ಡಾ. ಲೀಲಾ ಶಾಂತಕುಮಾರಿ, ಹಿಸ್ಟರಿ ಆಫ್ ದಿ ಅಗ್ರಹಾರಾಸ್–ಕರ್ನಾಟಕ ೪೦೦-೧೩೦೦, ಪುಟ ೨೪.

2 ಕರ್ನಾಟಕ ಇನ್ಸ್‌ಕ್ರಿಪಷನ್ಸ್, ಸಂ. ೪, ಸಂಖ್ಯೆ ೧೧, ೧೨ನೆಯ ಶತಮಾನ

ನಿಯೋಗಿ ಎಂಬ ಪದ ಶಾಸನಗಳಲ್ಲಿ ಕಂಡುಬರುವುದಿಲ್ಲ.) ಈ ನಿಯೋಗಿಗಳ ಬಗ್ಗೆ ಹೊಯ್ಸಳರ ಶಾಸನಗಳಲ್ಲಿ ತಕ್ಕಮಟ್ಟಿಗೆ ಮಾಹಿತಿ ದೊರೆಯತ್ತದೆ. ವೀರನಾರಸಿಂಹನ ತಿರುಮಕೂಡಲ ನರಸೀಪುರ ಶಾಸನಗಳು[3] ಸೋಮನಾಥಪುರ ಅಗ್ರಹಾರದಲ್ಲಿದ್ದ ದೇವಾಲಯಗಳ ಉದ್ಯೋಗಿಗಳನ್ನು ಬಾಹತ್ತರನಿಯೋಗಿಗಳೆಂದ ಉಲ್ಲೇಖಿಸಿರುವುದಲ್ಲದೆ ಅವರನ್ನು ಗುರುತಿಸಲು ನೆರವಾಗುತ್ತವೆ. ಅದರಂತೆ ಆಚಾರ್ಯರು, ನಂಬಿಯರು, ಪರಿಚಾಕರು, ಮಾಲೆಗಾರರು, ಸಿಂಗಾರಿಗಳು ವಾದ್ಯದವರು ಅಥವಾ ಓಲಗದವರು, ಬಾಣಗರು, ಅಪ್ಪಣೆಯವರು, ಅಫ್ವಣೆಯವರು (?) ಆರತಿಯವರು, ಅಂಗರಕ್ಷಕರು ದವಸಿಗರು, ಕುಂಬಾರರು, ಅಕ್ಕಸಾಲಿ, ಅಗಸ, ನಾವಿದ, ಸೇನಬೋವ, ಭಂಡಾರಿ, ಅಧ್ಯಕ್ಷ ಮೊದಲಾದವರು ದೇವಾಲಯದ ನಿರ್ವಹಣೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರು. ಇವರು ದೇವಾಲಯದ ಅನಿವಾರ್ಯ ಅಂಗಗಳಾಗಿದ್ದುದು ಹೌದು. ಹಾಗಾಗಿ ದೇವಾಲಯಗಳು ಸಾಮಾಜಿಕ ಸಂಸ್ಥೆಗಳೆನಿಸಿದ್ದು ಧಾರ್ಮಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಚಟುವಟಿಕೆಗಳ ತಾಣಗಳಾಗಿದ್ದವು.

ತಿರುಮಕೂಡಲು ನರಸೀಪುರ ತಾಲೂಕಿನ ಶಾಸನಗಳು ವೈಷ್ಣವ ಹಾಗೂ ಶೈವ ದೇವಾಲಯಗಳಿಗೆ ಪ್ರತ್ಯೇಕವಾಗಿ ದತ್ತಿಕೊಟ್ಟ ವಿವರವನ್ನೊಳಗೊಂಡಿವೆ. ಪ್ರಸ್ತುತ ಅಧ್ಯಯನಕ್ಕನುಗುಣವಾಗಿ ನಿಯೋಗಿಗಳಿಗೆ ವಿನಿಯೋಗಿಸಲಾಗುತ್ತಿದ್ದ ಆದಾಯವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ. ದೇವಾಲಯಗಳಿಗೆ ನಿಯುಕ್ತರಾಗುತ್ತಿದ್ದ ನಿಯೋಗಿಗಳು ಹಾಗೂ ಅವರ ವೇತನವನ್ನು (ವಾರ್ಷಿಕ) ಕೆಳಕಂಡ ಪಟ್ಟಿಯ ಮೂಲಕ ತಿಳಿಯಬಹುದು.

| | | ಕೇಶವ ದೇವಾಲಯ | | ಪಂಚಲಿಂಗ ದೇವಾಲಯ | |
|---|---|---|---|---|---|
| | ನಿಯೋಗಿಗಳು | ಸಂಖ್ಯೆ | ವೇತನ ಗದ್ಯಾಣದಲ್ಲಿ | ಸಂಖ್ಯೆ | ವೇತನ ಗದ್ಯಾಣದಲ್ಲಿ |
| ೧. | ವೈಷ್ಣವರು | ೨೦ | ೩೦೦ | — | — |
| ೨. | ಸ್ಥಾನಿಕರು | — | — | ೬ | ೭೨ |
| ೩. | ಆಚಾರ್ಯರು | — | ೨೦ | — | ೬ |
| ೪. | ಪುರಾಣ ಉವಾಚಕ್ಕೆ | — | ೧೬ | — | ೧೨ |
| ೫. | ನಂಬಿಯರು | ೧೦ ಅರ್ಧ | ೧೨೬ | ೬ | ೭೨ |
| ೬. | ಸಿಂಗಾರಿಗಳು | ೫ | ೩೦ | ೬ | ೩೬ |
| ೭. | ಪರಿಚಾರಕರು | ೧೦ ಅರ್ಧ | ೪೨ | ೬ | ೨೪ |
| ೮. | ಅಪ್ಪಣೆಯವರು | ೧೦ ಅರ್ಧ | ೪೨ | — | — |
| ೯. | ದೇವರ ಅಫ್ವಣೆಯವರು | — | — | — | ೨೪ |
| ೧೦. | ಹಡಪದೋಲಗ | — | ೬ | — | — |
| ೧೧. | ಕುಡಿನೀರ ವೋಲಗ | — | ೬ | — | — |
| ೧೨. | ಶ್ರೀಗಂಧದೋಲಗ | — | ೬ | — | — |
| ೧೩. | ಮುವ್ರೆಯವೋಲಗ | — | ೧೨ | — | — |
| ೧೪. | ಭಂಡಾರದೋಲಗ | — | — | — | ೧೨ |
| ೧೫. | ಸೀಗುರಿಚಾಮರದೋಲಗ | — | ೧೨ | — | ೧೨ |

3 ಎಪಿಗ್ರಾಫಿಯಾ ಕರ್ನಾಟಕ ಸಂ. ೫ (ಪರಿಷ್ಕೃತ ಆವೃತ್ತಿ) ತಿನ. ೮೮ ಮತ್ತು ೮೯

| | ನಿಯೋಗಿಗಳು | ಕೇಶವ ದೇವಾಲಯ ಸಂಖ್ಯೆ | ಕೇಶವ ದೇವಾಲಯ ವೇತನ ಗದ್ಯಾಣದಲ್ಲಿ | ಪಂಚಲಿಂಗ ದೇವಾಲಯ ಸಂಖ್ಯೆ | ಪಂಚಲಿಂಗ ದೇವಾಲಯ ವೇತನ ಗದ್ಯಾಣದಲ್ಲಿ |
|---|---|---|---|---|---|
| ೧೬. | ಗಂಧಕುಡಿನೀರವರು | — | — | — | ೧೨ |
| ೧೭. | ಕರ್ಪೂರದಾರತಿಯವರು | ೨ | ೧೬ | — | ೧೨ |
| ೧೮ | ರಂಗವಾಲೆ ಹಿಟ್ಟಿನಾರತಿಯವರು | ೪ | ೧೬ | — | — |
| ೧೯. | ಬಾಣಸಿಗರು | ೧೦ ಅರ್ಧ | ೪೨ | ೫ | ೨೪ |
| ೨೦. | ಬಾಣಸದ ಅಪ್ಪಣಿಯವರು | ೫ | ೨೦ | — | — |
| ೨೧. | ಬಾಣಸದ ಅಫ್ವಣಿಯವರು | — | — | ೬ | ೨೪ |
| ೨೨. | ರಂಗವಾಲೆ | — | — | ೩ | ೧೨ |
| ೨೩. | ಬಾಹಿಯವರು | ೫ | ೨೦ | ೬ | ೨೪ |
| ೨೪. | ಮಾಲೆಗಾರರು | ೧೦ ಅರ್ಧ | ೪೨ | ೬ | ೨೪ |
| ೨೫. | ದವಸಿಗರು | ೧೦ | ೪೦ | ೬ | ೨೪ |
| ೨೬. | ದವಸಿಗರ ಆಳು | — | — | ೧೨ | ೪೮ |
| ೨೭. | ಅಂಘೆರಿಕರ ಆಳು | ೧೭ | ೬೮ | ೯ | ೩೬ |
| ೨೮. | ಅಂಗರಕ್ಕ ನಾಯಕ | — | ೧೦ | — | ೧೦ |
| ೨೯. | ಭಂಡಾರಿ | — | — | — | ೧೨ |
| ೩೦. | ಮುದ್ರೆಯ ಅದ್ದಿಕ (ಅಧ್ಯಕ್ಷ) | — | — | — | ೧೨ |
| ೩೧. | ಸೇನಬೋವ | — | ೧೨ | — | — |
| ೩೨. | ಸೇನಬೋವ ಭಟ್ಟಗುತ್ತರು | — | — | — | ೧೮ |
| ೩೩. | ಭಟ್ಟಗುತ್ತರು (?) | ೨ | ೨೦ | — | — |
| ೩೪. | ಅಕ್ಕಸಾಲೆ | — | ೪ | — | ೨ |
| ೩೫. | ಕುಂಬಾರರು | ೩ | — | ೩ | ೧೨ |
| ೩೬. | ಅಸಗ | — | ೪ | — | ೪ |
| ೩೭. | ನಾಯಿಂದ | — | ೪ | — | ೪ |
| ೩೮. | ನಾಗವಾಸಕ್ಕೆ | — | ೩೦೦ | — | — |
| ೩೯. | ರಂಗಭೋಗದ ನಾಗವಾಸದ ಮೊಖರಿಗೆ | — | — | — | ೩೦ |
| ೪೦. | ಕೊಠಾರಿ | — | — | — | ೧೨ |
| ೪೧. | ಇಣ್ದೆಯವರು (?) | — | — | ೬ | ೨೪ |

ಮೇಲ್ಕಂಡ ಪಟ್ಟಿಯಲ್ಲಿ ಉದ್ಯೋಗಿಗಳನ್ನು ವೀಕ್ಷಿಸಿದಾಗ ಸಮಾಜದ ವಿವಿಧ ವರ್ಗಗಳ ಜನರಿಗೆ ದೇವಾಲಯಗಳಲ್ಲಿ ಸೇವೆ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತೆಂಬುದು ಗಮನಾರ್ಹ. ನೇಮಿತ ಸಂಖ್ಯೆ ಇನ್ನೂರನ್ನು ಮೀರಿದೆ. ನಿಯೋಗ ಬಹುಸಂಖ್ಯೆಯಲ್ಲಿದ್ದರೂ ನಗದು ರೂಪದಲ್ಲಿ ವಾರ್ಷಿಕ ವೇತನ ನಿಗದಿಪಡಿಸಲಾಗುತ್ತಿತ್ತು. ಇದು ಆರ್ಥಿಕ ವ್ಯವಸ್ಥೆಯಲ್ಲಿ ಹಣಕಾಸು ಬೆಳವಣಿಗೆಯನ್ನು ಸೂಚಿಸುತ್ತದೆ. ಹಾಗೆಯೇ ಕೃಷಿಯೇತರ ಕಾರ್ಮಿಕರ ಜೀವನ ಮಟ್ಟ ನಿರ್ಧರಿಸಲು ಸಹಕಾರಿಯಾಗುತ್ತದೆ. ದೇವಾಲಯದ ಸಾಮಾನ್ಯ ನೌಕರನಿಗೆ ೪ ಗದ್ಯಾಣ ಸಂಭಾವನೆ ದೊರೆಯುತ್ತಿತ್ತೆಂದು ಗೋಚರಿಸುತ್ತದೆ ! 'ದುಡಿಮೆಗೆ

ತಕ್ಕ ವೇತನ' ನಿಯಮವನ್ನು ಆಳ್ವಿಕೆಗಾರರು ತಮ್ಮ ಆರ್ಥಿಕ ನೀತಿಯಲ್ಲಿ ಅಳವಡಿಸಿಕೊಂಡಿದ್ದನ್ನು ಗಮನಿಸ ಬಹುದು.

ಶಾಸನಗಳಲ್ಲಿ ಸೋಮನಾಥಪುರ ಮಹಾ ಅಗ್ರಹಾರವೆಂದೂ, ವಿದ್ಯಾನಿಧಿ ಪ್ರಸನ್ನವೆಂದೂ, ಸರ್ವ ಶಾಸ್ತ್ರಗಳನ್ನು ಬಲ್ಲ ಉಪಾಧ್ಯಾಯರನ್ನು ಹೊಂದಿತ್ತೆಂದೂ ವರ್ಣಿಸಲಾಗಿದೆ. ಈ ಅಗ್ರಹಾರವು ದೋ-ಆಬ್ ಪ್ರದೇಶದಲ್ಲಿದ್ದುದರಿಂದ ದೇವಾಲಯಗಳು ಪಡೆದ ದತ್ತಿಯೂ ಅಧಿಕ ಪ್ರಮಾಣದ್ದಾಗಿದೆ. ಪರಿಣಾಮ ವಾಗಿ ಅಗ್ರಹಾರವು ಆರ್ಥಿಕವಾಗಿ ಸಂಪತ್ತಿನಿಂದ ಕೂಡಿತ್ತು. ಆಂದಮೇಲೆ ಪ್ರತಿಷ್ಠಿತ ಅಗ್ರಹಾರಗಳಲ್ಲಿ ಸೋಮನಾಥಪುರ ಒಂದಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಪ್ರಾಯಶಃ ಅಗ್ರಹಾರದ ಆರ್ಥಿಕ ಸ್ಥಿರತೇ ಬಹು ನಿಯೋಗಿಗಳ ನೆಲೆಸುವಿಕೆಗೆ ಎಡೆಮಾಡಿಕೊಟ್ಟಿರ ಬಹುದು.

ಅಗ್ರಹಾರದ ವೈಷ್ಣವರು, ಆಚಾರ್ಯರು ಮತ್ತು ನಂಬಿಯರಿಗೆ ನೀಡಿದ ದತ್ತಿಶಾಸನದಲ್ಲಿ[4] ಈ ನಿಯೋಗಿಗಳು ಸಂಬಂಧಿಸಿದಂತೆ ಈ ರೀತಿ ಆದೇಶಿಸಲಾಗಿದೆ. "ತಂಮ ಬಾಹತ್ತರ ನಿಯೋಗಿಗಳಿಗೆ ಪೂರ್ವ್ವಮರಿಯಾದೆಯ ಶಾಸನದಲುಳ್ಳ ಜೀವಿತವನು ಮುನ್ನಿನ ಮರಿಯಾದೆಯಲ್ಲಿ ಮಾರೆಯ ಹಳ್ಳಿಯಲ್ಲಿ ನೆಲೆಜೀವಿತವಾಗಿ ಕೊಳುತಾಬಹರು" ಎಂದು. ಇದರಿಂದ ವೈಷ್ಣವ ದೇವಾಲಯದ (ಕೇಶವ ದೇವಾಲಯ) ಉದ್ಯೋಗಿಗಳ ಭವಿಷ್ಯ ಭದ್ರವಾಗಿತ್ತೆಂದು ಖಚಿತವಾಗುತ್ತದೆ. ಪ್ರಾರಂಭದಿಂದಲೂ ಈ ದೇವಾಲಯದ ನಿರ್ವಹಣೆಗೆ ಆದ್ಯತೆ ನೀಡಿದುದರಿಂದ ಇಂದಿಗೂ ಈ ದೇವಾಲಯ ಪ್ರವಾಸಿಗರನ್ನು ಆಕರ್ಷಿಸುತ್ತಿದೆ. ಪಂಚಲಿಂಗ ದೇವಾಲಯ ಸಂಪೂರ್ಣವಾಗಿ ನಿರ್ಲಕ್ಷಿತವಾಗಿದೆ.

4 ಅದೇ ಸಂಖ್ಯೆ ೯೧